## ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1293 |
| 2 | ಸದಸ್ಯರ ಹೆಸರು | : | ಶ್ರೀ ಅ. ದೇವೇಗೌಡ |
| 3 | ಉತ್ತರಿಸುವ ದಿನಾಂಕ | : | 21-12-2018 |
| 4 | ಉತ್ತರಿಸುವವರು | : | ಉಪ ಮುಖ್ಯಮಂತ್ರಿಗಳು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ನಗರದ ಪ್ರಸಿದ್ಧ ಮಹಾತ್ಮಗಾಂಧಿ ರಸ್ತೆಯಲ್ಲಿನ ಪಬ್ಲಿಕ್ ಯುಟಿಲಿಟಿ ಬಿಲ್ಡಿಂಗ್‌ನಿಂದ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಮಾಹೆಯಾನ ಬರುವ ಆದಾಯವೆಷ್ಟು; | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಸಹ ಕಂದಾಯ ಅಧಿಕಾರಿ (ಪೂರ್ವ-ಮಾರುಕಟ್ಟೆ) ಕಛೇರಿಗೆ ಒಳಪಡುವ ನೇತಾಜಿ ಸುಭಾಷ್ ಚಂದ್ರ ಬೋಸ್ (ಪಬ್ಲಿಕ್ ಯುಟಿಲಿಟಿ ಬಿಲ್ಡಿಂಗ್) ನಿಂದ ಮಾಹೆಯಾನ ರೂ.42,19,121/-ಗಳು ಆದಾಯ ಬರುತ್ತದೆ. |
| ಆ | ಸದರಿ ಕಟ್ಟಡದ ನಿರ್ವಹಣೆಗೆ ಮಾಹೆಯಾನ ತಗಲುವ ವೆಚ್ಚವೆಷ್ಟು; | ಸದರಿ ಕಟ್ಟಡದ ಸ್ವಚ್ಛತಾ ಕಾಮಗಾರಿ ಮತ್ತು ಅಗ್ನಿಶಾಮಕ ನಿಯಂತ್ರಣ ನಿರ್ವಹಣಾ ಕಾಮಗಾರಿ ಸೇರಿಸಿ ಒಟ್ಟು ಸುಮಾರು ಮಾಹೆಯಾನ ರೂ.5.00 ಲಕ್ಷಗಳಷ್ಟು ವೆಚ್ಚ ತಗಲುವುದು. |
| ಇ | ಪಬ್ಲಿಕ್ ಯುಟಿಲಿಟಿ ಬಿಲ್ಡಿಂಗ್ ನಗರದ ಪ್ರಸಿದ್ಧ ರಸ್ತೆಯಲ್ಲಿದ್ದು, ಸಾರ್ವಜನಿಕರ ಹಾಗೂ ಪ್ರವಾಸಿ ತಾಣವಾಗಿದ್ದು, ಈ ಒಂದು ಪ್ರಸಿದ್ಧ ಕಟ್ಟಡವನ್ನು ಸರಿಯಾಗಿ ನಿರ್ವಹಿಸದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸದರಿ ಕಟ್ಟಡದಲ್ಲಿ ಪಾಲಿಕೆ ಕಛೇರಿಗಳು, ಅರೆ ಸರ್ಕಾರಿ ಕಛೇರಿಗಳು, ವಾಣಿಜ್ಯ ಮಳಿಗೆಗಳು ಕಾರ್ಯನಿರ್ವಹಿಸುತ್ತಿರುತ್ತವೆ. ಸದರಿ ಕಟ್ಟಡದ ಸ್ವಚ್ಛತೆಯನ್ನು ದಿನನಿತ್ಯ ನಿರ್ವಹಿಸಲಾಗುತ್ತಿರುತ್ತದೆ ಮತ್ತು ಆಗ್ಗಿಂದಾಗೆ ಸದರಿ ಕಟ್ಟಡದ ದುರಸ್ಥಿ ಕಾಮಗಾರಿಗಳನ್ನು ಆದ್ಯತೆ ಮೇರೆಗೆ ಕೈಗೆತ್ತಿಕೊಳ್ಳಲಾಗುತ್ತಿದೆ. |
| ಈ | ಈ ಕಟ್ಟಡವನ್ನು ಉತ್ತಮ ಗುಣಮಟ್ಟದಲ್ಲಿ ಕಾಪಾಡಿಕೊಳ್ಳದೇ ಕರ್ತವ್ಯದಲ್ಲಿ ಚ್ಯುತಿ ಎಸಗಿರುವ ಅಧಿಕಾರಿಗಳ ಮೇಲೆ ಯಾವ ಕ್ರಮಕೈಗೊಳ್ಳಲಾಗುವುದು; | ಸದರಿ ಕಟ್ಟಡವನ್ನು ಉತ್ತಮ ಗುಣಮಟ್ಟದಲ್ಲಿ ಕಾಪಾಡಿಕೊಳ್ಳಲು ಪ್ರತಿನಿತ್ಯ ಸ್ವಚ್ಛತೆ ಮತ್ತು ಆಗ್ಗಿಂದಾಗೆ ದುರಸ್ಥಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗುತ್ತಿದ್ದು, ಕರ್ತವ್ಯ ಲೋಪದ ಪ್ರಶ್ನೆ ಉದ್ಭವಿಸುವುದಿಲ್ಲ. |
| ಉ | ಸದರಿ ಕಟ್ಟಡವನ್ನು ಸ್ವಚ್ಛತೆಯಿಂದ ಉತ್ತಮ ರೀತಿಯಲ್ಲಿ ಪ್ರೇಕ್ಷಣಿಯ ಕೇಂದ್ರವಾಗಿರುಸಲು ಯಾವ ಕ್ರಮ ಕೈಗೊಳ್ಳಲಾಗುವುದು? | ಸದರಿ ಕಟ್ಟಡವನ್ನು ಪ್ರೇಕ್ಷಣಿಯ ಕೇಂದ್ರವಾಗಿರಿಸಲು ಬಿಬಿಎಂಪಿ ಮುಂದೆ ಪ್ರಸ್ತುತ ಯಾವುದೇ ಪ್ರಸ್ತಾವನೆ ಇರುವುದಿಲ್ಲ. |

**ಸಂಖ್ಯೆ: ನಅಇ 656 ಎಂಎನ್‌ಯು 2018**

**(ಜಿ. ಪರಮೇಶ್ವರ)**
ಉಪ ಮುಖ್ಯಮಂತ್ರಿಗಳು